## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 350 (384) |
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 06.03.2020 |
| ಉತ್ತರಿಸುವವರು | : | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆ ವ್ಯವಸ್ಥೆ ಅಳವಡಿಸಿಕೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಸ್ವಚ್ಛ ಭಾರತ್ ಮಿಷನ್ (ಗ್ರಾಮೀಣ) ಯೋಜನೆಯ ಮಾರ್ಗಸೂಚಿಯಡಿ ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯ ಕಾಮಗಾರಿಯನ್ನು ಅನುಷ್ಟಾನ ಮಾಡಲು ಅವಕಾಶ ಕಲ್ಪಿಸಲಾಗಿದ್ದು, ಪ್ರತಿ ಘಟಕಕ್ಕೆ ರೂ.20.00ಲಕ್ಷಗಳವರೆಗೆ ಕುಟುಂಬಗಳ ಆಧಾರಗಳ ಮೇಲೆ ನಿಗದಿಪಡಿಸಲಾಗಿರುತ್ತದೆ. |
| (ಆ) | ಹಾಗಿದ್ದಲ್ಲಿ, ಈ ಪ್ರಸ್ತಾವನೆಯನ್ನು ಯಾವಾಗ ಅನುಮೋದಿಸಲಾಗುವುದು; | ಸ್ವಚ್ಛ ಭಾರತ್ ಮಿಷನ್ (ಗ್ರಾಮೀಣ) ಯೋಜನೆಯಡಿ 2019-20ನೇ ಸಾಲಿನಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯನ್ನು 1000 ಗ್ರಾಮ ಪಂಚಾಯತಿಗಳಲ್ಲಿ ಅನುಷ್ಠಾನ ಮಾಡುವುದಾಗಿ ಆಯವ್ಯಯದಲ್ಲಿ ಘೋಷಿಸಲಾಗಿರುತ್ತದೆ.<br>**ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣ (NGT) ವರದಿಯಂತೆ** ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆಯನ್ನು ಅನುಷ್ಠಾನ ಮಾಡಲು ಸೂಚಿಸಿದ್ದು, ಅದರಂತೆ **6021** ಗ್ರಾಮ ಪಂಚಾಯತಿಗಳಲ್ಲಿ ಘನ ತ್ಯಾಜ್ಯ ನಿರ್ವಹಣೆ ಮಾಡಲು ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ತಾತ್ವಿಕ ಅನುಮೋದನೆ ನೀಡಿ ವಿಸ್ತೃತ ಯೋಜನಾ ವರದಿ ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆ ಪಡೆಯುವಂತೆ ದಿನಾಂಕ 14.10.2019ರಂದು ಸರ್ಕಾರದ ಆದೇಶ ಹೊರಡಿಸಲಾಗಿದೆ.<br>ಘನ ತ್ಯಾಜ್ಯ ನಿರ್ವಹಣೆಯನ್ನು ವೈಜ್ಞಾನಿಕ ರೀತಿಯಲ್ಲಿ ವಿಲೇವಾರಿ ಮಾಡಲು ಪ್ರತಿ ಗ್ರಾ.ಪಂ.ಯಿಂದ ವಿಸ್ತೃತ ಯೋಜನಾ ವರದಿ (DPR) ಪಡೆಯಲಾಗುತ್ತಿದೆ. ಅದರಂತೆ ಈವರೆವಿಗೂ 1461 ಗ್ರಾಮ ಪಂಚಾಯತಿಗಳಿಂದ ವಿಸ್ತೃತ ಯೋಜನಾ ವರದಿ (DPR) ಸ್ವೀಕರಿಸಲಾಗಿರುತ್ತದೆ. ಸ್ವೀಕೃತವಾದ ವಿಸ್ತೃತ ಯೋಜನಾ ವರದಿ (DPR)ಗಳನ್ನು ರಾಜ್ಯ ಹಂತದಲ್ಲಿ ಪರಿಶೀಲಿಸಿ, ಈವರೆಗೆ 1184 ಪ್ರಸ್ತಾವನೆಗಳಿಗೆ ಅನುಮೋದನೆ ನೀಡಲಾಗಿದೆ. ಅನುಮೋದನೆ ನೀಡಿದ ಎಲ್ಲಾ ಗ್ರಾ.ಪಂ.ಗಳಿಗೆ ಒಟ್ಟಾರೆ ಮೊದಲನೇ ಕಂತಿನ ಅನುದಾನವಾಗಿ ರೂ.10540.74 ಲಕ್ಷಗಳನ್ನು ಬಿಡುಗಡೆಮಾಡಲಾಗಿರುತ್ತದೆ. |

| | | |
|---|---|---|
| | | ಪ್ರಸ್ತುತ 217 ಗ್ರಾಮ ಪಂಚಾಯತಿಗಳಲ್ಲಿ ಘನ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ತ್ಯಾಜ್ಯ ಸಂಗ್ರಹಣೆ ಹಾಗೂ ವಿಂಗಡಣೆ ಚಟುವಟಿಕೆಗಳು ಚಾಲ್ತಿಯಲ್ಲಿರುತ್ತದೆ. ಇತರೆ ಗ್ರಾ.ಪಂ.ಗಳಲ್ಲಿ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |
| (ಇ) | ಈ ಯೋಜನೆಗೆ ಸರ್ಕಾರ ನಿಗದಿಪಡಿಸಿರುವ ಅನುದಾನ ಮೊತ್ತವೆಷ್ಟು? (ಸಂಪೂರ್ಣ ಮಾಹಿತಿ ನೀಡುವುದು) | ಸ್ವಚ್ಛ ಭಾರತ್ ಮಿಷನ್ (ಗ್ರಾಮೀಣ) ಯೋಜನೆಯಡಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಗಾಗಿ ಪ್ರತಿ ಗ್ರಾಮ ಪಂಚಾಯಿತಿಗೆ ಕುಟುಂಬಗಳ ಆಧಾರದ ಮೇಲೆ ಕೆಳಕಂಡಂತೆ ಅನುದಾನವು ನಿಗದಿಯಾಗಿರುತ್ತದೆ.<br>• 0-150 ಕುಟುಂಬಗಳಿರುವ ಗ್ರಾ.ಪಂ.ಗಳಿಗೆ ರೂ.5.00ಲಕ್ಷಗಳು<br>• 151-300 ಕುಟುಂಬಗಳಿರುವ ಗ್ರಾ.ಪಂ.ಗಳಿಗೆ ರೂ.7.00ಲಕ್ಷಗಳು<br>• 301- 500 ಕುಟುಂಬಗಳಿರುವ ಗ್ರಾ.ಪಂ.ಗಳಿಗೆ ರೂ.12.00ಲಕ್ಷಗಳು<br>• 500ಕ್ಕೂ ಮೇಲ್ಪಟ್ಟ ಕುಟುಂಬಗಳಿರುವ ಗ್ರಾ.ಪಂ.ಗಳಿಗೆ ರೂ.20.00ಲಕ್ಷಗಳ ಅನುದಾನ ಬಳಸಿಕೊಳ್ಳಲು ಅವಕಾಶ ನೀಡಲಾಗಿದೆ.<br>ಸ್ವಚ್ಛ ಭಾರತ್ ಮಿಷನ್ (ಗ್ರಾಮೀಣ) ಯೋಜನೆಗೆ 2019-20ನೇ ಸಾಲಿನ ಆಯವ್ಯಯದಲ್ಲಿ ರೂ.740.00ಕೋಟಿಗಳ ಅನುದಾನವನ್ನು ನಿಗದಿಪಡಿಸಲಾಗಿರುತ್ತದೆ. |

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು